

ಪುಟ್ಟ ಮಕ್ಕಳಿಗೆ ಪ್ರಕೃತಿಯ ಕಥೆಗಳು

# ಅನುಕೂಲದ ಆಶ್ರಯ

ವಿದ್ಯಾ ಮತ್ತು ರಾಜಾರಾಮ್ ಶರ್ಮ
ಅನುವಾದ: ಶಾಂತಾ ಸುಬ್ಬ ರಾವ್



ಈ ಕಥೆ ದಕ್ಷಿಣ ದೆಹಲಿಯ ರಿಡ್ಜ್ ಅರಣ್ಯ ಪ್ರದೇಶದಲ್ಲಿರುವ ಸಂಜಯ ವನದಲ್ಲಿ 2010 ರ ಮೇ ಯಿಂದ ಜುಲೈ ವರೆಗೂ ಮಾಡಿದ ಅವಲೋಕನೆಗಳನ್ನು ಆಧರಿಸಿದೆ. ಹೊನ್ನಕ್ಕಿಯು ಗೂಡು ಕಟ್ಟಲು ಶುರುಮಾಡಿದ್ದು ಮೇ 30 ರಂದು. ಮೊದಲನೆಯ ಮರಿ ಗೂಡು ಬಿಟ್ಟಿದ್ದು ಜುಲೈ 11.

ಈ ಪುಸ್ತಕದಲ್ಲಿ ಇರುವ ಚಿತ್ರಗಳು ಪಕ್ಷಿಯ ಅಥವ ಗೂಡುಗಳ ನಿಜವಾದ ಗಾತ್ರವನ್ನು ತೋರಿಸದೇ ಇರಬಹುದು.






http://vidyaonline.net

"ನಿಲ್ಲಿ, ನಿಲ್ಲಿ!" ಗಟ್ಟಿಯಾಗಿ ಕೂಗಿದೆ.

ಎರಡು ಹಳದಿ ಪಕ್ಷಿಗಳು ಒಂದು ಕಾಗೆಯನ್ನು ಅಟ್ಟಿಸಿಕೊಂಡು ಮರಗಳ ನಡುವೆ ವೇಗವಾಗಿ ಹಾರುತಿದ್ದುವು.

ಕಾಗೆಯನ್ನು ದೂರ ಓಡಿಸಿ ಬೇಗ ಹಿಂತಿರುಗಿದವು. ಪೆಚ್ಚಾಗಿದ್ದುವು ಗಾಬರಿಯಿಂದ. ಅಲ್ಲಿ ಇಲ್ಲಿ ನೋಡುತ್ತಾ ಕೂಗುತಿದ್ದವು – ತೀಕ್ಷ್ಣವಾಗಿ, ಕರ್ಕಶವಾಗಿ.





ಇಂತಹ ಪಕ್ಷಿಗಳನ್ನು ನಾನು ಈ ಹಿಂದೆ ನೋಡಿರಲಿಲ್ಲ. ಒಂದು ಅಚ್ಚ ಹಳದಿ ಪಕ್ಷಿ. ಅದರ ರೆಕ್ಕೆಗಳ ತುದಿ, ಕಣ್ಣಿನ ಸುತ್ತಲಿನ ಜಾಗ ಮತ್ತು ಬಾಲಗಳು ಅಪ್ಪಟ ಕಪ್ಪು. ಇನ್ನೊಂದು ಸ್ವಲ್ಪ ಮಂಕು ಬಣ್ಣದ್ದು. ಅದರದ್ದು ಹಸಿರು ಬೆರೆತ ಹಳದಿ ರೆಕ್ಕೆ. ಎರಡೂ ದೊಡ್ಡ ಪಕ್ಷಿಗಳೇ, ಆದರೆ ಪಾರಿವಾಳದಷ್ಟು ದೊಡ್ಡವಲ್ಲ.

"ಯಾಕೆ ಹಾಗೆ ಕಾಗೆಯನ್ನು ಅಟ್ಟಿಸಿಕೊಂಡು ಹೋಗುತ್ತಿದ್ದೀರಿ?" ಕೇಳಿದೆ ಕುತೂಹಲದಿಂದ.

ಉತ್ತರವಿಲ್ಲ.

ಉತ್ತರಕ್ಕಾಗಿ ಕಾದು ಸಾಕಾಗಿ ಇನ್ನೇನು ಹೊರಟುಬಿಡಬೇಕು ಎನಿಸತೊಡಗಿದಾಗ

ಆ ಮಂಕು ಬಣ್ಣದ ಪಕ್ಷಿ ಮೆಲ್ಲನೆ ಹೇಳಿತು:

“ನಾನು ತಾಯಿ ಹೊನ್ನಕ್ಕಿ. ಆತ ತಂದೆ ಹೊನ್ನಕ್ಕಿ. ಅಲ್ಲಿರೋದು ನಮ್ಮ ಮೊದಲನೆಯ ಮರಿ.”

“ಓ, ಎಲ್ಲಿ ನಿಮ್ಮ ಮೊದಲನೆಯ ಮರಿ?” ಕೇಳಿದೆ ನಾನು.

ಪುನಃ ಉತ್ತರವಿಲ್ಲ. ಅಷ್ಟರಲ್ಲಿ, ಒಂದು ಮರಿ ಪಕ್ಷಿ ನನ್ನ ಕಣ್ಣಿಗೆ ಬಿತ್ತು! ಒಣಗಿದ ಪೊದೆಯನ್ನು ಹತ್ತಲು ಅದು ಇನ್ನಿಲ್ಲದ ಪ್ರಯತ್ನ ಮಾಡುತ್ತಲಿತ್ತು. ಅದರ ಓರಣವಿಲ್ಲದ ತಲೆ, ಮೊಟುಕು ಬಾಲ – ಅದು ಸ್ವಲ್ಪಮಟ್ಟಿಗೆ ತಾಯಿ ಹೊನ್ನಕ್ಕಿಯನ್ನು ಹೋಲುತ್ತಿತ್ತು.





“ಓ, ಅದೇ ಇರಬೇಕು ಇವುಗಳ ಮೊದಲ ಮರಿ!” ಈ ಆವಿಷ್ಕಾರದಿಂದ ಉದ್ರೇಕಿತಳಾಗಿದ್ದ ನಾನು ಉತ್ಸಾಹದಿಂದ ಕೂಗಿದೆ.

ನಾನು ಮರಿಯನ್ನು ಗಮನಿದ್ದನ್ನು  ತಾಯಿ ಹೊನ್ನಕ್ಕಿ ನೋಡುತ್ತಾ “ಸರಿಯಾಗಿ ಹೇಳಿದೆ ನೀನು. ಅದೇ ನಮ್ಮ ಮರಿ. ಇನ್ನೂ ಒಂದು ಮರಿ ಮೇಲೆ ಗೂಡಿನೊಳಗೆ ಇದೆ.” ಎಂದಿತು.

“ಮೇಲೆ! ಎಲ್ಲಿ?”

ನನಗೆ ಗೂಡು ತೋರಿಸಲು ತಂದೆ ಹೊನ್ನಕ್ಕಿ ಪಕ್ಕದ ಹೊಂಬಾಗೆ ಮರದಲ್ಲಿ ಇದ್ದ ಗೂಡಿನ ಕಡೆಗೆ ಹಾರಿತು.

ಗೂಡು ಬಹಳ ಎತ್ತರದಲ್ಲಿತ್ತು. ಬಹುಶಃ ನಾನು ನನ್ನಷ್ಟಕ್ಕೇ ಅದನ್ನು ಗಮನಿಸಲು ಸಾಧ್ಯವಾಗುತ್ತಿರಲಿಲ್ಲ. ಕಣ್ಣನ್ನು ಕಿರಿದು ಮಾಡಿಕೊಂಡು ಸರಿಯಾಗಿ ನೋಡಲು ಪ್ರಯತ್ನಿಸಿದೆ. ಬೈನಾಕ್ಯುಲರ್ಸ್ ತರದೆ ಬಂದುದಕ್ಕೆ ನನ್ನನ್ನು ನಾನೇ ಶಪಿಸಿಕೊಂಡೆ.

ಎತ್ತರವಾದ ಕೊಂಬೆಯ ತುದಿಯಲ್ಲಿ ಕವಲೊಡೆದ ಜಾಗದಲ್ಲಿ ಆ ಗೂಡು ಇತ್ತು. ಅದು ಆಳವಾಗಿತ್ತು. ಸಣ್ಣ ತೊಟ್ಟಿಲಿನಂತೆ ಕಾಣುತ್ತಿತ್ತು. ಒಣಗಿದ ಹುಲ್ಲಿನಿಂದ ಮಾಡಿದಂತಿತ್ತು. ಪ್ಲಾಸ್ಟಿಕ್ ಸೇರಿಸಿ ಹೆಣೆದಿದ್ದ ಗೂಡು ಕಂಡು ತಮಾಷೆ ಅನ್ನಿಸಿತು. ಪಕ್ಷಿಗಳೂ ಪ್ಲಾಸ್ಟಿಕ್ ಉಪಯೋಗಿಸುತ್ತವಲ್ಲಾ!

ಗೂಡು ನೋಡಲು ತುಂಬಾ ಸುಂದರವಾಗಿತ್ತು. ಮೆಚ್ಚುತ್ತಾ ನಿಂತೆ. ಆದರೂ ಸ್ವಲ್ಪ ಗೊಂದಲವೆನಿಸಿತು.





“ನಿಮ್ಮ ಮರಿಗೆ ಇನ್ನೂ ಹಾರಕ್ಕೆ ಬರಲ್ಲ! ಅದು ಎಗರುತ್ತಿದ್ದದನ್ನು ನಾನು ನೋಡಿದೆ. ಅದು ಜಿಗಿಯುತ್ತಿತ್ತಾ? ಕುಪ್ಪಳಿಸುತ್ತಿತ್ತಾ? ಏನೋ ಒಂದು. ಅದೇನೇ ಇರಲಿ. ಹೇಗೆ? ಅದು ಹೇಗೆ ಮೇಲಿಂದ ಕೆಳಕ್ಕೆ –?”

ಪ್ರಶ್ನೆ ಮುಗಿಸುವ ಮೊದಲೇ, ತಾಯಿ ಹೊನ್ನಕ್ಕಿ ಮೆಚ್ಚುಗೆಯ ನೋಟ ಬೀರುತ್ತಾ ಹೆಮ್ಮೆಯಿಂದ ಹೇಳಿತು, “ಕೆಳಗೆ ಬಿದ್ದ, ಅಷ್ಟೇ –”

“ಏನು? ಕೆಳಕ್ಕೆ ಬಿದ್ದನೇ!” ಉತ್ತರಿಸಲು ಬಿಡದೇ ನಾನು ಗಾಬರಿಯಿಂದ ಕೇಳಿದೆ.

ನಾನು ಕಳೆದ ವರ್ಷ ಬಿದ್ದದ್ದು ನೆನಪಾಯಿತು. ಮರದಿಂದ ಬಿದ್ದಿದ್ದೆ. ತುಂಬಾ ನೋವಾಗಿತ್ತು. ಕೈಮೂಳೆ ಮುರಿದಿತ್ತು.

“ಅವನ ಕೈ ಮುರಿದಿದೆಯಾ, ನೋಡಿದೆಯಾ? ಅಥವಾ ...”

“ಓ ಅವನ ರೆಕ್ಕೆ ಬಗ್ಗೇನಾ ನೀನು ಹೇಳ್ತಾ ಇರೋದು! ಇಲ್ಲ, ಏನೂ ಮುರಿದಿಲ್ಲ. ಇವತ್ತು ಗೂಡು ಬಿಟ್ಟು ಹಾರುವ ಸಮಯ.  ಹಾರಲಾಗದೆ ಬಿದ್ದಿದಾನೆ, ಅಷ್ಟೇ. ಕಲೀತಾನೆ, ಬಿಡು. ಗೂಡು ಬಿಡೋದಕ್ಕೆ ಮೊದಲೇ  ಮರಿಗಳು ರೆಕ್ಕೆ ಬಡಿಯುವುದನ್ನು ಕಲಿತಿರುತ್ತವೆ ಅಂತ ನಿನಗೆ ಗೊತ್ತಿರಬೇಕು. ಹೀಗಾಗಿ ಬಿದ್ದಾಗ ಏಟೇನೂ ಆಗುವುದಿಲ್ಲ.”

“ಆದರೂ ... ಮರಿಗಳು ಬೀಳಬಹುದು ಅಂತ ಗೊತ್ತಿದ್ದರೂ ನೀವು ಅಷ್ಟು ಎತ್ತರದಲ್ಲಿ ಗೂಡು ಏಕೆ ಕಟ್ಟಬೇಕು? ಕಾರಣವೇನು? ಇನ್ನೂ ಕೆಳಗೆ ಕಟ್ಟಬಹುದಿತ್ತಲ್ಲಾ?” ಕೇಳಿದೆ ಆತಂಕದಿಂದ.





ಹೊಂಬಾಗೆ ಭಾರಿ ಎತ್ತರದ ಮರ. ನಾನು ಬಿದ್ದ ಮರಕ್ಕಿಂತ ಮೂರರಷ್ಟು ಎತ್ತರವಾಗಿತ್ತು ಈ ಮರ.

ತಾಯಿ ಹೊನ್ನಕ್ಕಿ ಜೋರಾಗಿ ನಕ್ಕುಬಿಟ್ಟಳು.

“ಸರಿಹೊಯ್ತು ... ನಾವು ಎತ್ತರವಾದ ಮರಗಳಲ್ಲಿರೋ ಪಕ್ಷಿಗಳು. ನೆಲದ ಮೇಲೆ ಕಾಣಿಸಿಕೊಳ್ಳುವುದು ಅಪರೂಪ. ನಮಗೆ ಹಣ್ಣು ಹಂಪಲುಗಳು, ಮಧು ತುಂಬಾ ಇಷ್ಟ. ಎತ್ತರದ ಮರಗಳಲ್ಲಿ ಇವು ಬೇಕಾದಷ್ಟು ಸಿಗುತ್ತವೆ. ಅನುಕೂಲವಾಗಿರುವ ಮತ್ತು ಅಪಾಯವಿಲ್ಲದ ಜಾಗಗಳಲ್ಲಿ ನಾವು ಗೂಡು ಕಟ್ಟುತ್ತೇವೆ. ನಿನಗೆ ಗೊತ್ತಿದೆಯಾ? ನಾವು ಗೂಡು ಕಟ್ಟಲು ದಕ್ಷಿಣ ಭಾರತದಿಂದ ಉತ್ತರಕ್ಕೆ ಬರುತ್ತೇವೆ. ಮರಿಗಳಿಗೆ ಬೇಕಾಗಿರುವುದು ಬೇಸಿಗೆ ಕಾಲ.”

ನಾನು ಇನ್ನೊಮ್ಮೆ ಆ ಗೂಡಿನ ಕಡೆಗೆ ನೋಡಿದೆ. ಮೇಲಿನ ಕೊಂಬೆಯ ಮೇಲೆ ಏನೋ ಕುಳಿತಿರುವಂತೆ ಕಂಡಿತು. ಅಲ್ಲಿ ದಪ್ಪಗಿದ್ದ ಹಸಿರು ಬಣ್ಣದ ಇನ್ನೊಂದು ಪಕ್ಷಿ ಇರುವುದನ್ನು ಕಂಡು ಅಶ್ಚರ್ಯಗೊಂಡೆ.

ತುಂಬಾ ಎತ್ತರದಲ್ಲಿ ಇದ್ದುದ್ದರಿಂದ ಅದು ಸ್ಪಷ್ಟವಾಗಿ ಕಾಣುತ್ತಿರಲಿಲ್ಲ. ಆದಾಗ್ಯೂ ಅದು ಕಡ್ಡಿಗಳ ಹಾಸಿನ ಮೇಲೆ ಕುಳಿತಿರುವಂತೆ ಅನಿಸುತ್ತಿತ್ತು.

"ಯಾರದು?" ಎಂದು ಕೇಳಿದೆ.

"ಓ, ಅದಾ? ಅದು ಮನಿಯಾಡಲು ಪಕ್ಷಿ. ಅವಳೂ ಅಲ್ಲಿ ಗೂಡು ಕಟ್ಟಿದ್ದಾಳೆ." ತಾಯಿ ಹೊನ್ನಕ್ಕಿ ಮುಂದುವರಿಸುತ್ತಾ ಹೇಳಿದಳು:





“ಪಕ್ಕದ ಅತ್ತಿ ಮರವನ್ನು ಗಮನವಿಟ್ಟು ನೋಡು. ಅಲ್ಲಿ ಚಿಕ್ಕ ಬಟ್ಟಲಾಕಾರದ ಗೂಡು ಕಾಣಿಸುತ್ತಿದೆಯಾ? ತುಂಬಾ ಚಿಕ್ಕದು. ಅದು ಬೆಳ್ಗಣ್ಣದ ಗೂಡು. ಪಕ್ಕದ ಕೊಂಬೆಯಲ್ಲಿ ಇನ್ನೊಂದು ಬಟ್ಟಲು ಗೂಡು ಇದೆ. ಸ್ವಲ್ಪ ದೊಡ್ಡದು. ನಯವಾದ ಕಡ್ಡಿಗಳಿಂದ ಮಾಡಿದೆಯಲ್ಲಾ ... ಅದು. ಅದು ಪಿಕಳಾರ ಪಕ್ಷಿಯ ಗೂಡು.”

ನನ್ನ ಗೊಂದಲವನ್ನು ಲೆಕ್ಕಿಸದೇ ತಾಯಿ ಹೊನ್ನಕ್ಕಿ ಮುಂದುವರಿಸಿತು. “ಎಲ್ಲದಕ್ಕಿಂತ ಕೆಳಗಿನ ಕೊಂಬೆಯಲ್ಲಿ ನೇತಾಡುತ್ತಿರುವ ಒಂದು ಗೂಡು ಕಾಣಿಸುತ್ತಿದೆಯಾ? ಅದು ಸೂರಕ್ಕಿಯ ಗೂಡು. ಬಲಗಡೆಗೆ ಅಡ್ಡವಾಗಿರೊ ಕೊಂಬೆಯ ಕವಲಲ್ಲಿ ಬಟ್ಟಲಾಕಾರದ ದೊಡ್ಡ ಗೂಡು ಕಾಣಿಸುತ್ತಿದೆಯಲ್ಲಾ? ಅದರಲ್ಲಿ ಮರಿಗಳೂ ಇವೆ! ಅದು ಕಾಜಾಣದ ಗೂಡು. ಈಗ ಪಕ್ಕದ ಮರವನ್ನು ನೋಡು. ಅದೂ ಸಹ ಹೊಂಬಾಗೆ ಮರ. ಅಲ್ಲಿ ಉದ್ದವಾದ ಬಾಲದ ಕಂದು ಬಣ್ಣದ ಪಕ್ಷಿ

ಕಾಣಿಸುತ್ತಿದೆಯಲ್ಲಾ? ಅದು ತಂದೆ ರಾಜಹಕ್ಕಿ ಮತ್ತು ಆ ಚಿಕ್ಕ –"

"ತಡೀ, ತಡೀ! ಅಷ್ಟೊಂದು ಪಕ್ಷಿಗಳು ... ಅಷ್ಟೊಂದು ಗೂಡುಗಳು ... ಎಲ್ಲಿ ನೋಡಲಿ? ಏನೂ ಗೊತ್ತಾಗುತ್ತಿಲ್ಲ. ತಲೆ ತಿರುಗುತ್ತಿದೆ. ಇನ್ನೇನಾದರು ತೋರಿಸುವ ಮುಂಚೆ –"

ಅಷ್ಟರಲ್ಲಿಯೇ ತಂದೆ ಹೊನ್ನಕ್ಕಿ ಅಡ್ಡಬಾಯಿ ಹಾಕಿದ. "ನಾವೆಲ್ಲರೂ ಕಾಜಾಣದ ಗೂಡಿನ ಹತ್ತಿರವೇ ನಮ್ಮ ಗೂಡನ್ನು ಕಟ್ಟಲು ಇಷ್ಟ ಪಡುತ್ತೇವೆ ಅಂತ ಹೇಳುತ್ತಿದ್ದಾಳೆ, ಅಷ್ಟೆ."

"ಅದೇಕೆ?"





“ಸರಳ! ಕಾಜಾಣಗಳು ತುಂಬ ಜಾಗರೂಕ ಪಕ್ಷಿಗಳು. ತಮ್ಮ ಗೂಡನ್ನು ಹಾಗೂ ಗೂಡು ಇರುವ ಮರವನ್ನು ಬಹಳ ಚೆನ್ನಾಗಿ ಸಂರಕ್ಷಿಸಬಲ್ಲವು. ಮೊಟ್ಟೆಗಳನ್ನಾಗಲೀ ಮರಿಗಳನ್ನಾಗಲೀ ತಿನ್ನಲು ಬರುವ ಪಕ್ಷಿಗಳ ಮೇಲೆ ಆಕ್ರಮಣ ನಡೆಸಿ ಅವುಗಳನ್ನು ಓಡಿಸಲು ಹಿಂದೆಮುಂದೆ ನೋಡುವುದಿಲ್ಲ. ಕೆಲವು ಪಕ್ಷಿಗಳಿಗೆ ಮಾತ್ರ ಅವು ತಮ್ಮ ಗೂಡಿನ ಹತ್ತಿರ ಗೂಡನ್ನು ಕಟ್ಟಲು ಬಿಡುತ್ತವೆ. ಉದಾಹರಣೆಗೆ, ಒಂದೇ ಮರದಲ್ಲಿ ಕಾಗೆ ಮತ್ತು ಕಾಜಾಣದ ಗೂಡುಗಳು ಕಂಡು ಬರುವುದಿಲ್ಲ.”

“ಕಾಗೆ?” ಈ ಪಕ್ಷಿಗಳು ಕಾಗೆಯನ್ನು ಓಡಿಸಿದ್ದು ನೆನಪಿಗೆ ಬಂತು.

“ಕಾಗೆಗೂ ಇದೆಲ್ಲವಕ್ಕೂ ಏನು ಸಂಬಂಧ? ಅಂದಹಾಗೆ ಆಗ ನೀವುಗಳು ಕಾಗೆಯನ್ನು ಓಡಿಸುತ್ತಿದ್ದಿರಿ, ಅಲ್ಲವಾ!

“ಅಯ್ಯೋ! ತಿಳಿದುಕೊಳ್ಳಬೇಕಾ? ಕೇಳು ...” ತಾಯಿ ಹೊನ್ನಕ್ಕಿ ನಿಟ್ಟುಸಿರು ಬಿಟ್ಟು ದುಃಖದಿಂದ ಹೇಳಿತು.

“ಕೆಲವು ಪಕ್ಷಿಗಳು ಹಣ್ಣು ಹಂಪಲುಗಳನ್ನೂ ಇನ್ನು ಕೆಲವು ಮಧುವನ್ನೂ ಮತ್ತೆ ಕೆಲವು ಬೀಜಗಳನ್ನೂ ಇಷ್ಟಪಡುತ್ತವೆ. ನಾವೂ ಸೇರಿದಂತೆ ಬಹುತೇಕ ಪಕ್ಷಿಗಳು ಕ್ರಿಮಿಕೀಟಗಳನ್ನು ತಿನ್ನುತ್ತೇವೆ. ಒಬ್ಬೊಬ್ಬರ ಆಹಾರ ಒಂದೊಂದು ತರಹ. ಆದಾಗ್ಯೂ ಕೆಲವು ಪಕ್ಷಿಗಳ ಅಚ್ಚುಮೆಚ್ಚಿನ ಊಟವೆಂದರೆ ಮೊಟ್ಟೆಮರಿಗಳು, ಚಿಕ್ಕ ಚಿಕ್ಕ ಪಕ್ಷಿಗಳು ಅಥವಾ –”

“ತಡೀ, ತಡೀ! ನನಗೆ ಗೊತ್ತಾಯಿತು. ಆ ಕಾಗೆಗೆ ನಿಮ್ಮ ಮರಿಯ ಮೇಲೆ ಕಣ್ಣು ಬಿದ್ದಿತ್ತು, ಅಲ್ಲವಾ?”





ಥಟ್ಟನೆ ಪರಿಸ್ಥಿತಿ ಅರ್ಥವಾಯಿತು. ಎಲ್ಲವೂ ಸ್ಪಷ್ಟವಾಯಿತು.

ಕಾಜಾಣ ಪಕ್ಷಿಗಳಿಂದ ಸ್ವಲ್ಪಮಟ್ಟಿಗೆ ರಕ್ಷಣೆ ಸಿಗಬಹುದು. ಆದರೆ ಯಾವಾಗಲೂ ಅವನ್ನು ನಂಬುವಹಾಗಿಲ್ಲ. ತಮ್ಮ ಮರಿಗಳ ರಕ್ಷಣೆ ತಾವೇ ಮಾಡಬೇಕು–ಆಗ ಕಾಗೆಯನ್ನು ಸಮರ್ಥವಾಗಿ ಓಡಿಸಿದ ಹಾಗೆ.

***



ತಾಯಿ ಹೊನ್ನಕ್ಕಿ (Mother Golden Oriole)



ಮೊದಲನೆ ಮರಿ (Firstborn)



ಮನಿಯಾಡಲು (Green Pigeon)



ಕೆಂಪುಕಿಬ್ಬೊಟ್ಟೆಯ ಪಿಕಳಾರಗಳು (Redvented Bulbuls)



ತಂದೆ ಸೂರಕ್ಕಿ (Father Purple Sunbird)



ತಾಯಿ ಸೂರಕ್ಕಿ (Mother Purple Sunbird)



ತಾಯಿ ರಾಜಹಕ್ಕಿ (Mother Paradise Flycatcher)

